# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly, KOPPA - CHM. ಫೋನ್: 114

6ನೇ ವರ್ಷ 34ನೇ ಸಂಚಿಕೆ ಕೊಪ್ಪ 20-3-1988 ಭಾನುವಾರ ಬೆಲೆ 50 ಪೈಸೆ




## ಜಾತಿ ಮುಖಂಡನಿಂದ ತನ್ನವರ ಮೇಲೇ ದರ್ಪದ ದೌರ್ಜನ್ಯ : ಬಡ ಪ್ರವೀಣನಿಗೆ ಪೋಲೀಸರಿಂದ ಚಿತ್ರಹಿಂಸೆ

**ಜಯಪುರ : ಇಲ್ಲಿ ಚಿನ್ನ-ಬೆಳ್ಳಿ ಕೆಲಸ ಮಾಡುವ ಗೋಪಾಲಾಚಾರಿ ಎಂಬ ಬಡ ವ್ಯಕ್ತಿಯ ತಮ್ಮನಾದ ಪ್ರವೀಣ್ ಕುಮಾರ್ ಎಂಬವರ ಮೇಲೆ ಅವರ ಜಾತಿ ಸಂಘದ ಮುಖಂಡರೇ ಪೋಲೀಸರ ಮೂಲಕ ತೀವ್ರವಾಗಿ ಹಲ್ಲೆ ಮಾಡಿಸಿದ್ದು, ಅವರೀಗ ಜರ್ಝರಿತ ಸ್ಥಿತಿಯಲ್ಲಿ ಚಿಕ್ಕಮಗಳೂರು ಆಸ್ಪತ್ರೆಗೆ ತೆರಳಿದ್ದಾರೆ.**

ಚಿಕ್ಕಮಗಳೂರಿನಲ್ಲಿ ವಿಶ್ವಕರ್ಮ ಸಮಾಜದ ಮುಖಂಡರೂ ಬಿಜೆಪಿ ಮುಖಂಡರೂ ಆದ ವಿಠಲಾಚಾರಿ ಎಂಬವರಲ್ಲಿ ಚಿನ್ನ-ಬೆಳ್ಳಿ ಕೆಲಸಕ್ಕಿದ್ದ ಪ್ರವೀಣ ತನ್ನ 3 ವರ್ಷದ ಸಂಬಳ ಕೇಳಿದ್ದೇ ಈ ಕೃತ್ಯಕ್ಕೆ ಕಾರಣವಾಯಿತು ಎನ್ನುತ್ತಾರೆ. ತನ್ನ ಅಂಗಡಿಯಿಂದ ಚಿನ್ನ ಕದ್ದಿದ್ದಾನೆಂದು ಅವನ ಮೇಲೆ ಸುಳ್ಳು ದೂರು ನೀಡಿದ ವಿಠಲಾಚಾರಿಯೊಂದಿಗೆ ಬಂದ ಕ್ರೈಮ್ ಸಬ್ ಇನ್ಸ್‌ಪೆಕ್ಟರ್ ರವಿಕುಮಾರ್, ತನ್ನ ಅಣ್ಣನ ಮನೆಗೆ ಬಂದಿದ್ದ ಪ್ರವೀಣನನ್ನು ಮಾ. 12ರ ಶನಿವಾರ ಬಂದು ವಿನಾ ಕಾರಣ ಬಂಧಿಸಿ, ಮನೆಯವರೆದುರೇ ಹೊಡೆದು-ಬಡಿದು ಚಿತ್ರಹಿಂಸೆ ಮಾಡಿದ್ದಲ್ಲದೆ, ಮರುದಿನ ಕೋರ್ಟಿಗೆ ರಜಾ ಇರುವುದರ ದುರ್ಲಾಭ ಪಡೆದು ಪ್ರವೀಣನನ್ನು ಚಿಕ್ಕಮಗಳೂರಿಗೆ ಎಳೆದೊಯ್ದು, ಪುನಃ ಇಡೀ 3 ದಿನ ಹಿಂಸಿಸಿದರೆಂದು ಪ್ರವೀಣ ಹೇಳುತ್ತಾರೆ.

### ದುಡಿವ ಕೈಗೇ ಜಖಂ

ತನ್ನಿಂದ ಸಾಲಗಾರನಂತೆ 7000 ರೂ.ಗೆ ಪತ್ರವನ್ನೂ, ಇನ್ನೂ ಏನೇನೋ ಎಲ್ಲ ವಿಠಲಾಚಾರಿ ಬರೆಸಿಕೊಂಡ ನಂತರ ತನ್ನನ್ನು ಬಿಡುಗಡೆ ಮಾಡಿದರೆನ್ನುವ ಪ್ರವೀಣ, "ನಿನ್ನನ್ನು ಇನ್ನು ಕೆಲಸ ಮಾಡದ ಹಾಗೆ ಮಾಡುತ್ತೇನೆ" ಎಂದು ವಿಠಲಾಚಾರಿ ಹೇಳಿ ತನ್ನ ಕೈಗೆ ಎಸ್ಸೈಯಿಂದ ಕಂಡಾಪಟ್ಟೆ ಹೊಡೆಸಿದರು ಎಂದು ಬಹಳ ನೋವಿನಿಂದ ಹೇಳುತ್ತಾರೆ.

ಈ ಹಿಂಸಾತ್ಮಕ ಹಲ್ಲೆಯಿಂದಾದ ಗಾಯಗಳಿಗೆ ಚಿಕಿತ್ಸೆ ನೀಡಿದ ಇಲ್ಲಿನ ಸರ್ಕಾರಿ ವೈದ್ಯರು ಪ್ರವೀಣನ ಹೇಳಿಕೆಗಳನ್ನು ದಾಖಲು ಮಾಡಿಕೊಂಡಿರುವುದಲ್ಲದೆ, ಆತನ ಕೈ ಮೂಳೆ ಮುರಿದಿರುವ ಶಂಕೆಯ ಮೇಲೆ ತಪಾಸಣೆಗಾಗಿ ಚಿಕ್ಕಮಗಳೂರಿನ ಮೂಳೆ ತಜ್ಞರಲ್ಲಿಗೆ ಕಳಿಸಿದ್ದಾರೆ.

### ಮೃಗೀಯ ಹಿಂಸೆಗೆ ಮದ್ದು ಬೇಕು

ಅಂತೂ ಈ ಜಾತಿ ಹುಳ ಮತ್ತು ಅದರ 'ಬೆಂಡಿಗೇರಿ' ಬ್ರಾಂಡ್ 'ಪ್ರಸಾದ' ತಿಂದ ಈ ರವಿಕುಮಾರ್ ಎಂಬ ಪೋಲೀಸ್ ಮೃಗ— ಎರಡೂ ಸೇರಿ ಈ ಬಡವರ ಜಾತಿ 'ಉದ್ಧಾರ' ಮಾಡಿದ್ದಾರೆ. ಹಾಗಲ್ಲವಾದರೆ ಕಳ್ಳತನಕ್ಕೆ ಈ ಚಿಕಿತ್ಸೆ ಕಾನೂನಿನಲ್ಲಿ ಇರುವಂಥದಲ್ಲ.

ಈಗಲಾದರೂ ಜಿಲ್ಲಾ ಪೋಲೀಸ್ ಮುಖ್ಯಾಧಿಕಾರಿ ಓಂಪ್ರಕಾಶ್ ಅವರು ಈ ಬಗ್ಗೆ ನಿಷ್ಪಕ್ಷಪಾತ ತನಿಖೆ ನಡೆಸಿ, ಇವರಿಗೆ ತಕ್ಕ 'ಪುರಸ್ಕಾರ' ನೀಡದಿದ್ದರೆ, ಅವರ ನೇತೃತ್ವದಲ್ಲಿ ಜಿಲ್ಲೆಯ ಬಡಜನ ಹಿಂದೆಂದೂ ಕಾಣದ 'ಪೋಲೀಸ್ ರಾಜ್ಯ' ಕಾಣಬೇಕಾದೀತು.! ಈ ಮೃಗೀಯ ಹಿಂಸೆಯಿಂದ ನಲುಗಿ ನುಜ್ಜಾಗಿರುವ ಬಡವನನ್ನು ಖುದ್ದು ನೋಡಿ ಈ ಕಟು ವರದಿ ಬರೆಯಬೇಕಾಗಿದೆ.

---

**ಪಂಚಾಯ್ತಿಯವರೂ ಸಾವಧಾನದಿಂದ ಯೋಚಿಸಬೇಕು. ನಿವಾಸಿಗಳ ನ್ಯಾಯಯುತ ಮನವಿಗೂ ನ್ಯಾಯವಾದ ಪುರಸ್ಕಾರ ಸಿಕ್ಕಬೇಕು.**

## ಬಾಳಗಡಿಯಲ್ಲಿ ರಾಜ್ಯ ಕೆಸರು ಗದ್ದೆ ಓಟ

ಕೊಪ್ಪ : ಯುವಜನ ಸೇವಾ ಇಲಾಖೆ ಮತ್ತು ಸರ್ವೋದಯ ಯುವಕ ಸಂಘ, ಬಾಳಗಡಿ, ಇವರ ಸಂಯುಕ್ತ ಆಶ್ರಯದಲ್ಲಿ ಬಾಳಗಡಿಯ ದಿವಂಗತ ಶ್ರೀಮತಿ ಶ್ರೀನಿವಾಸರಾವ್ ಇವರ ಸ್ಮರಣಾರ್ಥ ಯುವಕ-ಯುವತಿಯರಿಗಾಗಿ ರಾಜ್ಯ ಮಟ್ಟದ ಕೆಸರು ಗದ್ದೆ ಓಟ ಮತ್ತು ಹಗ್ಗ ಎಳೆಯುವ ಸ್ಪರ್ಧೆಯನ್ನು ತಾ|| 3-4-88ರ ಭಾನುವಾರ ಬಾಳಗಡಿಯಲ್ಲಿ ಏರ್ಪಡಿಸಲಾಗಿದೆ.

ಸ್ಪರ್ಧಿಗಳು ತಾ|| 30 3 88ರ ಒಳಗಾಗಿ ಕಾರ್ಯದರ್ಶಿ, ಸರ್ವೋದಯ ಯುವಕ ಸಂಘ, ಬಾಳಗಡಿ, ಕೊಪ್ಪ, ಅಥವಾ ತಾಲ್ಲೂಕು ಯುವಜನ ಕೇಂದ್ರ, ಹಳೇ ಆಸ್ಪತ್ರೆ ಕಟ್ಟಡ, ಕೊಪ್ಪ ಇವರಲ್ಲಿ ನೊಂದಾಯಿಸತಕ್ಕದ್ದು. ಹಗ್ಗ ಎಳೆಯುವ ಸ್ಪರ್ಧೆಯಲ್ಲಿ ಒಂದು ತಂಡದಿಂದ ಎಂಟು ಮಂದಿ ಭಾಗವಹಿಸಬಹುದು. ಪ್ರವೇಶ ಧನ 10 ರೂ. ಕೆಸರು ಗದ್ದೆ ಓಟಕ್ಕೆ 5 ರೂ. ಸ್ಪರ್ಧಿಗಳಿಗೆ ಊಟದ ವ್ಯವಸ್ಥೆ ಮತ್ತು ಸರಳ ವಸತಿ ವ್ಯವಸ್ಥೆ ಒದಗಿಸಲಾಗುವುದು.

## ಫೀನಾಯಿಲ್ ಘಟಕದ ಕಟ್ಟಡ ಸ್ಥಳಾಂತರಕ್ಕೆ ಒತ್ತಾಯ

ಕೊಪ್ಪ : ಇಲ್ಲಿನ ರಾಘವೇಂದ್ರ ನಗರ ಬಡಾವಣೆಯಲ್ಲಿರುವ ಫೀನಾಯಿಲ್ ತಯಾರಿಕೆಯ ದ್ವಾಕ್ರಾ ಘಟಕಕ್ಕಾಗಿ ಕಟ್ಟುತ್ತಿರುವ ಕಟ್ಟಡವನ್ನು ಕೂಡಲೇ ನಿಲ್ಲಿಸಿ ಬೇರೆ ಕಡೆ ಕಟ್ಟಬೇಕೆಂದು ಸುತ್ತಮುತ್ತಲ ನಿವಾಸಿಗಳು ಆಗ್ರಹಿಸಿದ್ದಾರೆ.

ಸ್ವಂತ ಕಟ್ಟಡ ಹೊಂದಿರುವ ಅಂಗನವಾಡಿಯ ಪಕ್ಕದಲ್ಲೇ ಈ ಕಟ್ಟಡ ಕಟ್ಟಲಾಗುತ್ತಿದ್ದು, ಸುತ್ತ ಮುತ್ತ ದಟ್ಟವಾಗಿ ಮನೆಗಳಿವೆ. ಫೀನಾಯಿಲ್ ತಯಾರಿಸುವಾಗ ಹೊರಸೂಸುವ ಘಾಟು ವಾಸನೆಯ ರಾಸಾಯನಿಕ ವಸ್ತುಗಳಿಂದ ಮತ್ತು ಸ್ವಚ್ಛ ಮಾಡಿದ್ದರಿಂದ ಹೊರ ಹರಿಯುವ ಕೊಳೆ ನೀರಿನಿಂದ ಮಕ್ಕಳಿಗೆ ಮತ್ತು ನಿವಾಸಿಗಳಿಗೆ ತೊಂದರೆಯಾಗುತ್ತದೆಂಬುದು ಮುಖ್ಯವಾದ ಆಕ್ಷೇಪ.

ಅಲ್ಲದೆ, ಈ ಕಟ್ಟಡ ಕಟ್ಟುತ್ತಿರುವ ಜಾಗವನ್ನು ಸ್ಥಳೀಯ ಯುವಕರು ಬೇರೆಯವರಿಗೆ ಮಂಜೂರಾಗುವುದನ್ನು ತಪ್ಪಿಸಿ, ಪ್ರ. ದ. ಕಾಲೇಜಿನ ರಾ. ಸೇ. ಯೋಜನೆಯವರ ನೆರವಿನಿಂದ ಶ್ರಮದಾನ ಮಾಡಿ ಆಟದ ಮೈದಾನವಾಗಿ ನಿರ್ಮಿಸಿದ್ದು. ಇಡೀ ಬಡಾವಣೆಯ ಮಕ್ಕಳಿಗೆ ಇದೇ ಪುಟ್ಟ ಆಟದ ಮೈದಾನ. ಅದನ್ನು ಹಾಗೇ ಉಳಿಸಬೇಕು ಎಂಬುದೂ ಬೇಡಿಕೆ.

ಈ ಆಕ್ಷೇಪವನ್ನು ಅಧಿಕಾರಿಗಳು ಸ್ವಲ್ಪ ಲಘುವಾಗಿ ಪರಿಗಣಿಸಿದಂತಿದೆ. ಅವರು ಹೇಳುತ್ತಾರೆ—ಇಲ್ಲಿ ತಿಂಗಳಿಗೆ ಕೇವಲ ಒಂದೋ ಎರಡೋ ಬಾರಿ ದ್ರಾವಣ ತಯಾರಿಸುತ್ತಿದ್ದಾರೆ. ಆದ್ದರಿಂದ ಇದು ಅಂಥಾ ಸಮಸ್ಯೆಯಲ್ಲ. ಈ ಪ್ರದೇಶದ ಎಲ್ಲ ಜಾಗವನ್ನೂ ಜನ ಆಕ್ರಮಿಸಿಕೊಂಡಿರುವುದರಿಂದ ಬೇರೆ ಜಾಗ ಹುಡುಕುವುದೂ ಕಷ್ಟ." ಇನ್ನು ಮಕ್ಕಳಿಗೆ ಆಟದ ಮೈದಾನ ಇಲ್ಲವೆಂಬ ಬಗ್ಗೆ ಯಾರಿಗೂ ಕಾಳಜಿ ಇದ್ದಂತಿಲ್ಲ.

ಆದರೆ ಈ ನಿಲುವು ಸೂಕ್ತವಲ್ಲ. ಇಲ್ಲಿನ ಫೀನಾಯಿಲ್‌ಗೆ ಸದ್ಯ ಬೇಡಿಕೆ ಕಮ್ಮಿಯಿದೆ. ಆದರೆ ಜಿಲ್ಲೆಯ ಎಲ್ಲಾ ಪುರಸಭೆ, ಆಸ್ಪತ್ರೆ, ಜಾನುವಾರು ಕೇಂದ್ರಗಳಿಂದ ಬೇಡಿಕೆ ಕೂಡಿಸಲು ಪ್ರಯತ್ನ ಸಾಗಿದೆ. ಈ ಘಟಕ ಇಡೀ ವರ್ಷ ಕೆಲಸ ಮಾಡಿ, ಇನ್ನೂ ಹತ್ತಾರು ಬಡ ಮಹಿಳೆಯರಿಗೆ ಉದ್ಯೋಗ ಒದಗಿಸುವಂತಾಗಬೇಕೆಂಬುದು ಸ್ಥಳೀಯರೆಲ್ಲರ ಇಚ್ಛೆ. ಘಟಕಕ್ಕೆ ಯಾರ ವಿರೋಧವೂ ಇಲ್ಲ. ಆದರೆ ಅದರಿಂದ ಮುಂದೆ ಅಪಾಯ ಇದ್ದೇ ಇದೆ.

2ನೆಯದಾಗಿ, ಜಾಗ ಹುಡುಕುವುದು ಕಷ್ಟ ಹೌದು. ಆದರೆ ಅಸಾಧ್ಯವಲ್ಲ. ಮನೆಯಿಲ್ಲದವರಿಗಿಂತಲೂ ಒಂದು ಕೈ ಮಿಗಿಲಾಗಿ ಪೇಟೆಯಲ್ಲಿ ಮನೆ, ನಿವೇಶನ ಎಲ್ಲ ಇರುವವರೇ ಇಲ್ಲಿ ಬಹಳಷ್ಟು ಜಾಗಕ್ಕೆ ಬೇಲಿ ಹಾಕಿಕೊಂಡಿದ್ದಾರೆ. ಆದ್ದರಿಂದ ಸೂಕ್ತ ಜಾಗ ಹುಡುಕಿ ಕಟ್ಟಡ ಸ್ಥಳಾಂತರಿಸುವುದು ಸಾಧ್ಯವಿದೆ.

ಇದನ್ನು ಅಧಿಕಾರಿಗಳೂ ಮಂಡಲ

## ಕೊಪ್ಪದಲ್ಲಿ ನಿಲ್ಲದ ಕಳ್ಳತನಗಳ ಸರಮಾಲೆ : 'ಸ್ಯಾರಿ ಗಾರ್ಡನ್'ನಲ್ಲಿ ಸೀರೆಗಳ ಲೂಟಿ

ಕೊಪ್ಪ : ಕಳೆದ ಸುಮಾರು 2 ತಿಂಗಳಿಂದ ಇಲ್ಲಿ ಹೆಚ್ಚಿರುವ ಕಳ್ಳತನಗಳ ಸರಮಾಲೆ ನಿಲ್ಲುವ ಲಕ್ಷಣಗಳಿಲ್ಲ. ಮಾ. 16ರ ರಾತ್ರಿ 2 ಗಂಟೆ ಸುಮಾರಿಗೆ ಇತ್ತೀಚೆಗಷ್ಟೇ ಅದ್ದೂರಿಯಾಗಿ ಆರಂಭವಾಗಿದ್ದ 'ಸ್ಯಾರಿ ಗಾರ್ಡನ್' ಅಂಗಡಿಯಲ್ಲಿ ಅಂದಾಜು 15 ರಿಂದ 20 ಸಾವಿರ ರೂ ಮೌಲ್ಯದ ಸುಮಾರು 100 ಸೀರೆಗಳ ಕಳವು ನಡೆದಿದೆ.

ಹಿಂದಿನ ರಾತ್ರಿ ಯಾರೋ ವ್ಯಕ್ತಿ ಹೊಂಚು ಹಾಕಿದ್ದನೆಂಬ ಸುದ್ದಿಯನ್ನನುಸರಿಸಿ ಸಬ್ ಇನ್ಸ್‌ಪೆಕ್ಟರ್ ದುರ್ಗಯ್ಯ ಪೋಲೀಸ್ ತುಕ್ರಪ್ಪ ಅವರನ್ನು ನುಡಿಮುಳ್ಳಿ ಕಾವಲು ಹಾಕಿದ್ದು ರಾತ್ರಿ 1.30ರ ಹೊತ್ತಿಗೆ ಸಿನಿಮಾ ನೋಡಿ ಹೋಗುವವನು ಯಾರೋ ಅವರನ್ನು ಗಮನಿಸಿ ಕಳ್ಳು ಸೂರಿದ್ದರಿಂದ ಅವರು ಅಲ್ಲಿಂದ ಹೊರಟು ಹೋಗಬೇಕಾಯಿತು. ಮತ್ತೆ ಸ್ವಲ್ಪ ಹೊತ್ತಿನಲ್ಲಿ ಕಳ್ಳತನ ನಡೆದಿದೆ.

ಪೋಲೀಸರು ಬೆರಳಚ್ಚು ಸಂಗ್ರಹಿಸಿದ್ದಾರೆ. ನಾಯಿಗೆ ಯಾವುದೇ ವಾಸನೆ ಹತ್ತಲಿಲ್ಲ. ಒಂದು ಮಚ್ಚು, ಬೀಗ ತೆಗೆಯಲು ಬಳಸಿದ ಕಬ್ಬಿಣ ಗುಳ ಇತ್ಯಾದಿ ಸಿಕ್ಕಿವೆ. ಇದೇ ಅವಧಿಯಲ್ಲಿ ಭದ್ರಾವತಿ, ಚಿಕ್ಕಮಗಳೂರುಗಳಲ್ಲೂ ಇದೇ ಅಂಗಡಿಗಳ ಮೇಲೆ ದಾಳಿ ನಡೆದಿದೆ ಎನ್ನಲಾಗಿದೆ.

ಕಳ್ಳರ ಬಗ್ಗೆ ಬೇರಾವುದೇ ಸುಳಿವು ಸಿಕ್ಕಿಲ್ಲ. ಪೋಲೀಸರು ಸಕ್ರಿಯರಾಗಿ ತನಿಖೆ ನಡೆಸುತ್ತಿದ್ದಾರೆ.

# ಚೀನಾದ ದಿಟ್ಟ ಹೊಸ ಕ್ರಮ ; ಕೀಳ್ಮಟ್ಟದ ವಸ್ತುಗಳದ್ದೇ ಪ್ರದರ್ಶನ

ಚೀನಾದ ಲಘು ಉದ್ದಿಮೆಗಳ ಮಂತ್ರಿಕೆಯು (Ministry of Light Industry) ಸಮಸ್ತ ಪ್ರಪಂಚದಲ್ಲೇ ಹೊಟ್ಟ ಮೊದಲನೆಯದೆಂದು ಅನ್ನಿಸಲಿಕ್ಕಿರುವ ಪ್ರದರ್ಶನವೊಂದನ್ನು ಬೈಜಿಂಗ್ ನಗರದಲ್ಲಿ ಏರ್ಪಡಿಸುವ ನಿರ್ಧಾರ ಮಾಡಿದೆ, ಕಳಪೆ ಮಟ್ಟದ ವಸ್ತುಗಳದ್ದೇ ಪ್ರದರ್ಶನವನ್ನು ಯೋಜಿಸಿದೆ. ಹಾಸ್ಯಕ್ಕಲ್ಲ. ಶುದ್ಧೀಕರಣದತ್ತ ಬಹಳ ಶ್ರದ್ಧೆಯ ಪ್ರಯತ್ನವಿದು. ಚೀನಾದ ಕಳಪೆ ಮಟ್ಟದ ಸರಕುಗಳನ್ನು ಭಾರಿ ಸಂಖ್ಯೆಯಲ್ಲಿ 'ಮೆರೆ'ಯಿಸಲಾಗುವುದು, ಸಾರ್ವಜನಿಕರ ವಿಮರ್ಶಕ ದೃಷ್ಟಿಗೆ ಒಡ್ಡಲಾಗುವುದು.

ಸರಕಾರಿ ಪತ್ರಿಕೆಗಳು ಈ ಪ್ರದರ್ಶನವನ್ನು China's Hall of Shame ಎಂಬುದಾಗಿ (Hall of Fame-ಕೀರ್ತಿಯ ಮಹಲು ಎಂಬುದರ ತದ್ವಿರುದ್ಧವಾಗಿ 'ಚೀನಾದ ನಾಚಿಕೆಯ ಮಹಲು') ಎಂದು ಕರೆದಿವೆ.

ಸದ್ಯದಲ್ಲೇ ಏರ್ಪಡಿಸಲಾಗುವ ಈ ಪ್ರದರ್ಶನದ ಸುದ್ದಿಯು ತಯಾರಕರ ಸಮುದಾಯದಲ್ಲಿ ದಿಗಿಲುಂಟಾಗುವಂತೆ ಮಾಡಿದೆ "ಲಘು ಉದ್ದಿಮೆಗಳ ಮಂತ್ರಿಕೆಯು ಈ ಪ್ರದರ್ಶನಕ್ಕಾಗಿ ನಮ್ಮ ತಯಾರಿಕೆಗಳನ್ನು ಆಯುವಂತಾಗದಿರಲಪ್ಪಾ" ಎಂದು ಅಂದುಕೊಂಡು ಚೀನಾದ ಉದ್ದಗಲಕ್ಕೂ ತಯಾರಕರು ತಮ್ಮ ತಯಾರಿಕೆಗಳ ಗುಣಮಟ್ಟದ ಕುರಿತು ವಿಶೇಷ ಕಣ್ಣಾವಲನ್ನಿರಿಸತೊಡಗಿದ್ದಾರೆ.

ಚೀನಾದಲ್ಲಿ ಈಚೆಗಿನ ಆರ್ಥಿಕ ಸುಧಾರಣೆಗಳ ಪರಿಣಾಮವಾಗಿ ಹೊಸತಾಗಿ ಸಿರಿವಂತರಾದ ಬಹು ಮಂದಿ ತಯಾರಕರಲ್ಲಿ, ರೈತರ ಮತ್ತು ಕಾರ್ಮಿಕರ ಹೆಚ್ಚುತ್ತಿರುವ ಬೇಡಿಕೆಯನ್ನು ಪೂರೈಸುವ ಸಲುವಾಗಿ ಉತ್ಪಾದನೆಯನ್ನು ಹೆಚ್ಚಿಸುವ ಭರದಲ್ಲಿ ಕಳಪೆ ಮಟ್ಟದ ಸರಕುಗಳನ್ನು ತಯಾರಿಸುವವರು ಅನೇಕರಿದ್ದಾರೆ. ಚೀನಾ ದೇಶವು ವಿದೇಶಗಳ ಮಾರುಕಟ್ಟೆಗಳಿಗೂ ದಾಳಿಯಿಡುವ ಕನಸು ಕಾಣುತ್ತಿರುವಾಗಲೇ ಕಳಪೆ

(3ನೇ ಪುಟಕ್ಕೆ)

## ಹಳ್ಳಿ ಮೂಲೆಯಲ್ಲೊಂದು 'ಸಹಕಾರಿ' ಗ್ರಂಥಾಲಯ

ಶೃಂಗೇರಿ ತಾಲ್ಲೂಕಿನ ಹಳ್ಳಿ ಮೂಲೆಯಾದ ಧರೆಕೊಪ್ಪ ಗ್ರಾಮದ ಮೇಲುಕೊಪ್ಪದಲ್ಲಿ ವಿದ್ಯಾವಂತ ಯುವಕರು ಸೇರಿಕೊಂಡು, ಬೇರೆ ಕಡೆಗಳಿಗೆ ಮಾದರಿಯಾಗುವಂಥ 'ಸಹಕಾರಿ' ಗ್ರಂಥಾಲಯವೊಂದನ್ನು ಆರಂಭಿಸಿದ್ದಾರೆ.

ಇಲ್ಲಿಗೆ ಒಂದೆರಡು ದಿನಪತ್ರಿಕೆಗಳು, ಆರೇಳು ವಾರಪತ್ರಿಕೆ ಮತ್ತು ಮ್ಯಾಗಜಿನ್‌ಗಳು ಹಾಗೂ ಕೆಲವು ಸ್ಥಳೀಯ ಪತ್ರಿಕೆಗಳನ್ನು ನಿಯಮಿತವಾಗಿ ತರಿಸುತ್ತಾರೆ. ಅವುಗಳ ಖರ್ಚನ್ನು ಗ್ರಂಥಾಲಯದ ಸುಮಾರು 20 ಜನ ಸದಸ್ಯರು ಪ್ರತಿ ತಿಂಗಳೂ ಸಮನಾಗಿ ಹಂಚಿಕೊಳ್ಳುತ್ತಾರೆ.

ಪತ್ರಿಕೆಗಳನ್ನು ಸ್ಥಳೀಯ ದೇವಾಲಯದ ಒಳ ಜಗಲಿಯಲ್ಲಿ ಒಂದು ಉದ್ದವಾದ ಮೇಜಿನ ಮೇಲೆ ಜೋಡಿಸಿರುತ್ತಾರೆ ಊರಿನ ಯಾರು ಬೇಕಾದರೂ ಅಲ್ಲೇ ಬಂದು ಓದಿಕೊಂಡು ಹೋಗಬಹುದು. ಗ್ರಂಥಾಲಯ ಪಾಲಕರೆಂದು ಯಾರೂ ಇರುವುದಿಲ್ಲ. ಅವರವರೇ ಪತ್ರಿಕೆಗಳನ್ನು ಓರಣವಾಗಿ ಇಟ್ಟು ಹೋಗುತ್ತಾರೆ.

ಅಪರೂಪದ ಇಂಥದೊಂದು ಚಟುವಟಿಕೆ ಯಶಸ್ವಿಯಾಗಿ ಬಹಳ ಕಾಲ ಮುಂದುವರಿದುಕೊಂಡು ಹೋಗುವುದಲ್ಲದೆ, ಬೇರೆ ಹಳ್ಳಿಗಳ ಯುವಜನ ಸಂಘಗಳು ಇದನ್ನು ತಮ್ಮ ಒಂದು ಕಡ್ಡಾಯ ಚಟುವಟಿಕೆಯಾಗಿ ಹಮ್ಮಿಕೊಳ್ಳಬೇಕೆಂದು 'ಮುಂಜಾವು' ಹಾರೈಸುತ್ತದೆ.



## ಕರ್ನಾಟಕ ಬ್ಯಾಂಕ್ ಲಿ.

ರಿಜಿಸ್ಟರ್ಡ್ ಆಫೀಸು : ಮಂಗಳೂರು - 575003

**ಶಾಖೆ : ನಾರ್ವೆ, ಕೊಪ್ಪ ತಾಲ್ಲೂಕು**

ತಾ. 20 3.1988

## ಹರಾಜು ನೋಟೀಸು

ಈ ಕೆಳಗಿನ ಮಹನೀಯರು ನಮ್ಮ ಶಾಖೆಯಿಂದ ಚಿನ್ನಾಭರಣ ನಗಗಳ ಈಡಿನ ಮೇಲೆ ಪಡೆದ ಸಾಲವನ್ನು ವಾಯಿದೆಗೆ ಸರಿಯಾಗಿ ಮರು ಪಾವತಿ ಮಾಡದೆ ಇದ್ದುದರಿಂದ ಸದರಿಯವರಿಗೆ ರಿಜಿಸ್ಟ್ರಿ ನೋಟೀಸು ಮೂಲಕ ಕೇಳಿಕೊಂಡಿದ್ದಂತೆ, ಕೆಲವರಿಗೆ ಕಳುಹಿಸಿದ ರಿಜಿಸ್ಟ್ರಿ ನೋಟೀಸುಗಳು ಕಾರಣಾಂತರಗಳಿಂದ ನಮಗೇನೇ ವಾಪಾಸು ಬಂದಿರುವುದರಿಂದಲೂ, ಸದ್ರಿಯವರಿಗೆ ವ ಅವರ ವಾರಸುದಾರರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಸಾಲದ ಬಾಬ್ತು ಬ್ಯಾಂಕಿಗೆ ಸಲ್ಲತಕ್ಕ ಮೊಬಲಗನ್ನು ಬಡ್ಡಿ ಸಮೇತ ತಾ॥ 31.3.88ರ ಒಳಗೆ ಬ್ಯಾಂಕಿಗೆ ಮರುಪಾವತಿ ಮಾಡಲು ತಪ್ಪಿದಲ್ಲಿ ಸದ್ರಿಯುವರು ನಮ್ಮಲ್ಲಿ ಅಡವಿಟ್ಟ ನಗಗಳನ್ನು ತಾ॥ 7.4 88 ಮಧ್ಯಾಹ್ನ ಘಂಟೆ 2 ಕ್ಕೆ ಸರಿಯಾಗಿ ಬ್ಯಾಂಕಿನ ಆವರಣದಲ್ಲಿ ಬಹಿರಂಗ ಹರಾಜು ಮಾಡಲಾದೀತು. ಯಾ ಬ್ಯಾಂಕಿಗೆ ಯುಕ್ತ ಕಂಡ ಇತರ ದಿನಗಳಲ್ಲಿ ಪುನಃ ನೋಟೀಸು ಕೊಡದೇನೇ ಬಹಿರಂಗ ಯಾ ಖಾಸಗಿಯಾಗಿ ಹರಾಜು ಮಾಡಲಾದೀತು. ಈ ಸಂಬಂಧ ಬ್ಯಾಂಕಿಗೆ ಉಂಟಾಗಬಹುದಾದ ಸಕಲ ಖರ್ಚು ವ ನಷ್ಟವನ್ನು ತೆರಲು ಸದ್ರಿ ಸಾಲಗಾರರು ಜವಾಬುದಾರರಾಗಿರುತ್ತಾರೆ. ತಿಳಿದಿರಲಿ.

| ಕ್ರಮಾಂಕ 1 | ಸಾಲದ ನಂಬ್ರ 2 | ಸಾಲಗಾರರ ಹೆಸರು ಮತ್ತು ವಿಳಾಸ 3 | ಮೊಬಲಗು 4 |
|---|---|---|---|
| 1 | 64/84<br>2.5.84 | ಶ್ರೀ ಎನ್. ಎಂ. ನಾಗರಾಜ<br>s/o ಮಂಜಪ್ಪ ಗೌಡ<br>ನಿಲುಗುಳಿ, ನಾರ್ವೆ ಅಂಚೆ | 2038-00 |
| 2 | 71/84<br>8.5.84 | ಶ್ರೀ ಕೆ. ಟಿ. ಯೋಗೇಂದ್ರ<br>s/o ತಮ್ಮಯ್ಯ ಗೌಡ<br>ಕೌಳಿ, ಜಯಪುರ ಅಂಚೆ | 1941-45 |
| 3 | 120/84<br>8 8 84 | ಬಸವ<br>s/o ಕರಿಯ, ಕೂಲಿ<br>ನಾರ್ವೆ ಅಂಚೆ | 194-45 |
| 4 | 167/84<br>9.10.84 | ವಿ. ಆರ್. ನಾಗಭೂಷಣ<br>s/o ವಿ. ರಾಮರಾವ್<br>ಕೆಳಂಗಡಿ, ಉತ್ತಮೇಶ್ವರ ಅಂಚೆ | 492-05 |
| 5 | 27/85<br>29.3.85 | ಯು. ಜಿ. ಚಿನ್ನಪ್ಪ<br>s/o ಗಿಡ್ಡೇಗೌಡ, ಕುಂಚೂರು<br>ಅಂದಗಾರು ಅಂಚೆ | 183-75 |
| 6 | 29/85<br>2 4.85 | ನಾಗಯ್ಯ s/o ಮಂಜಯ್ಯ<br>ಮುತ್ತೂರು<br>ಉತ್ತಮೇಶ್ವರ ಅಂಚೆ | 515-25 |
| 7 | 101/85<br>16 8.85 | ಬಿ. ಎಮ್. ಕಳಸಪ್ಪ ಗೌಡ<br>s/o ಬಿ. ಮಾನಪ್ಪ ಗೌಡ<br>ಬೆಳಗೊಳ, ನಾರ್ವೆ ಅಂಚೆ | 3380-80 |
| 8 | 19/86<br>18.2.86 | ಡಿ. ರಾಮೇಗೌಡ<br>s/o ದುಗ್ಗೇಗೌಡ<br>ಪಿ.ಡಬ್ಲ್ಯು.ಡಿ ಜ್ಯೂನಿಯರ್<br>ವರ್ಕ್ ಇನ್ಸ್‌ಪೆಕ್ಟರ್, ಜಯಪುರ | 5396-65 |
| 9 | 26/86<br>5.3.86 | ಕೆ. ಟಿ. ಮೋಹನ್<br>s/o ತಮ್ಮೇಗೌಡ<br>ಕೆಳಮುತ್ತೂರು ಉತ್ತಮೇಶ್ವರ ಅಂಚೆ | 1649-15 |
| 10 | 38/86<br>9.4.86 | ಎನ್. ಟಿ. ಸತೀಶ್<br>s/o ತಿಮ್ಮಯ್ಯ ನಾಯಕ್<br>ನಿಲುವಾಗಿಲು ಅಂಚೆ | 2703-50 |
| 11 | 44/86<br>28.4.86 | ಎಸ್. ಮಂಜುಳಾ<br>w/o ಎಂ.ಪಿ. ರಾಜಪ್ಪ<br>ಹೆಲ್ತ್ ವರ್ಕರ್, ನಾರ್ವೆ | 1857-40 |
| 12 | 49/86<br>13.5.86 | ಬಿ. ಜಿ. ಹರೀಶ್<br>s/o ಗೋಪಾಲ ಗೌಡ,<br>ಬೆಳವಿನಕೊಪ್ಪ ಮೇಲುಕೊಪ್ಪ ಅಂಚೆ | 3319-15 |
| 13 | 61/86<br>16.6.86 | ಶಂಕರಪ್ಪ ನಾಯ್ಕ್<br>s/o ತಮ್ಮಯ್ಯ ನಾಯ್ಕ್<br>ದೇವರಕುಡಿಗೆ, ಅಂದಗಾರು ಅಂಚೆ | 883-65 |
| 14 | 74/83<br>7.7 83 | ಎನ್. ಎಂ. ನಾಗರಾಜ್<br>s/o ಮಂಜಪ್ಪ ಗೌಡ<br>ನಿಲುಗುಳಿ, ನಾರ್ವೆ ಅಂಚೆ | 3080-05 |

(ಸಹಿ)

ಶಾಖಾ ವ್ಯವಸ್ಥಾಪಕರು

## ಓದುಗರ ಪತ್ರಗಳು

### 'ಕೊಳಕು ನಿವಾರಿಸಿ'

ಮಾನ್ಯರೆ,

ಇಲ್ಲಿ ಹರಿಜನ ಮತ್ತು ಗಿರಿಜನರಿಗಾಗಿ ರಸ್ತೆಯೊಂದು ನಿರ್ಮಿತವಾಗುತ್ತಿದೆ. ಇದಕ್ಕಾಗಿ ಬಂದ ಕೆಲಸಗಾರರು ಹುಲಿಗರಡಿ ಶಾಲೆಯ ಬಯಲಿನಲ್ಲಿ ಡೇರೆ ಹೂಡಿದ್ದು, ರಸ್ತೆಯ ಬದಿ, ಶಾಲೆಯ ಸುತ್ತಮುತ್ತ ಮಲ ವಿಸರ್ಜಿಸಿ ಕೊಳಕು ಮಾಡುತ್ತಿರುವರು. ಇದರಿಂದ ದಾರಿಯಲ್ಲಿ ತಿರುಗುವ ಸಾರ್ವಜನಿಕರಿಗೆ ಮತ್ತು ಶಾಲೆಯ ಮಕ್ಕಳಿಗೆ ತೊಂದರೆಯಾಗುತ್ತಿದೆ. ಸಂಬಂಧಪಟ್ಟವರು ಈ ಸಮಸ್ಯೆ ಪರಿಹರಿಸಬೇಕೆಂದು ಗ್ರಾಮಸ್ಥರ ಪರವಾಗಿ ಕೇಳಿಕೊಳ್ಳುತ್ತೇನೆ.

—ಎಚ್. ಎಂ ಗಿರೀಶ್, ಹುಲಿಗರಡಿ.

### "ಈ ತಾರತಮ್ಯ ನಿವಾರಿಸಿ"

ಮಾನ್ಯರೆ,

ಪ್ರಕೃತಿ ವಿಕೋಪಕ್ಕೆ ಗುರಿಯಾದ ರೈತರಿಗೆ ರಾಜ್ಯ ಸರ್ಕಾರ ಈಗಾಗಲೇ ಬಡ್ಡಿ ಮನ್ನಾ ಮಾಡಿದೆಯಷ್ಟೆ. ಆದರೆ ಇದರಲ್ಲೂ ನತದೃಷ್ಟರಿದ್ದಾರೆನ್ನಲು ವಿಷಾದವಾಗುತ್ತದೆ. ಏಕೆಂದರೆ ಈ ರಿಯಾಯಿತಿ ಸಹಕಾರ ಸಂಘ, ಸಹಕಾರಿ ಬ್ಯಾಂಕ್‌ಗಳಲ್ಲಿ ಸಾಲ ಪಡೆದವರಿಗೆ ಮಾತ್ರ ಅನ್ವಯವಾಗುತ್ತದೆ. ಆದರೆ ಕೆನರಾ, ಸಿಂಡಿಕೇಟ್ ಮುಂತಾದ ವ್ಯಾಪಾರಿ ಬ್ಯಾಂಕ್‌ಗಳಿಂದಲೂ, ಅಡಿಕೆ ಸೊಸೈಟಿಯಿಂದಲೂ ಪಡೆದ ಕೃಷಿ ಸಾಲಗಳಿಗೆ ಅನ್ವಯಿಸುವುದಿಲ್ಲ.

ಈ ತಾರತಮ್ಯ ನೀತಿ ಏಕೆಂದು ಅರ್ಥವಾಗುವುದಿಲ್ಲ. ಈ ಬಾರಿ ಅಡಿಕೆ ಸೊಸೈಟಿ ಮಹಾಸಭೆಯಲ್ಲಿ ರೈತರಿಗೆ ರಿಯಾಯಿತಿ ಬಡ್ಡಿದರದಲ್ಲಿ ಸಾಲ ನೀಡುವ ಬಗ್ಗೆ ಚರ್ಚಿಸಬಾರದೇಕೆ? ಹಾಗೆಯೇ, ವ್ಯಾಪಾರಿ ಬ್ಯಾಂಕ್‌ಗಳ ಕೃಷಿ ಸಾಲಗಳ ಈ ಬಾರಿಯ ಬಡ್ಡಿಯನ್ನೂ ಸರ್ಕಾರ ಮನ್ನಾ ಮಾಡಬಾರದೇಕೆ? ಸರ್ಕಾರ ಮತ್ತು ಸಂಬಂಧಪಟ್ಟವರು ಇತ್ತ ಗಮನ ಹರಿಸುವರೆ?

ಈವರೆಗೆ ಈ ರೀತಿ ರಿಯಾಯಿತಿ ಸುಸ್ತಿಬಾಕಿದಾರರಿಗೆ ಮಾತ್ರ ಅನ್ವಯಿಸುತ್ತಿತ್ತು. ಎಲ್ಲರೂ ಸುಸ್ತಿದಾರರಾಗಬೇಕೇನೋ ಎಂಬಂತಾಗಿತ್ತು. ಆದರೆ ಈ ಬಾರಿ ಕಂತು ಪಾವತಿಸಿರುವ ರೈತರಿಗೂ ಸೇರಿದಂತೆ ಎಲ್ಲಾ ರೈತರಿಗೂ ರಿಯಾಯಿತಿ ಅನ್ವಯಿಸಿರುವುದು ಬಹಳ ಸ್ವಾಗತಾರ್ಹ ಕ್ರಮ. ಇದನ್ನೇ ಅಡಿಕೆ ಸೊಸೈಟಿ ಮತ್ತು ವ್ಯಾಪಾರಿ ಬ್ಯಾಂಕ್‌ಗಳ ಕೃಷಿ ಸಾಲದ ಕಂತಿಗೂ ಅನ್ವಯಿಸಿದರೆ ಎಲ್ಲಾ ರೈತರಿಗೂ ಒಂದೇ ನೀತಿಯಾದಂತಾಗುತ್ತದೆ.

—ಹೊಸ್ಮನೆ ರಮೇಶ್
ಗಡಿಕಲ್

## ಚೀನಾದ ದಿಟ್ಟ ಕ್ರಮ

(2ನೇ ಪುಟದಿಂದ)

ವಸ್ತುಗಳ ಹೆಚ್ಚಳವಾಗುತ್ತಿರುವುದು ಸಹಜವಾಗಿ ಸರಕಾರವನ್ನು ವ್ಯಾಕುಲಿತಗೊಳಿಸಿದೆ. ಹೆಚ್ಚಿನ ಉದ್ದಿಮೆಗಳ ಪಾರುಪತ್ಯದವರು ಈಗ ಚುರುಕುಗೊಂಡಿದ್ದಾರೆ. ತಮ್ಮ ಕುರಿತು ಜನಮನದಲ್ಲಿರುವ ಅಭಿಪ್ರಾಯಗಳ ಬಗೆಗೆ ತಯಾರಕರು ನಿಗಾ ಇರಿಸತೊಡಗಿದ್ದಾರೆ.

ಚೀನಾದ ಈ ದಿಟ್ಟ ಹೊಸ ಕ್ರಮವನ್ನು ಭಾರತದಲ್ಲೂ ಅನುಸರಿಸಬಾರದೇಕೆ? ದಿನವೂ ಪತ್ರಿಕೆಗಳು, ಆಕಾಶವಾಣಿಯ ಮತ್ತು ದೂರದರ್ಶನದ ಮೂಲಕ ಭಾರಿ ಭರಾಟೆಯ ಜಾಹೀರಾತುಗಳಿಗೆ ಒಡ್ಡಲ್ಪಟ್ಟು, ಎಷ್ಟೋ ಸರಕುಗಳ ಕುರಿತು ತಪ್ಪು ಕಲ್ಪನೆಗಳನ್ನೇ ಹೊಂದುತ್ತಿರುವ ನಮ್ಮಲ್ಲಿಯ ಗ್ರಾಹಕರಿಗೆ 'ನಾಚಿಕೆಯ ಮಹಲ್' ಎಂಬುದರಿಂದ ತುಂಬ ಪ್ರಯೋಜನವಾಗದಿರದು. ಶೋಷಣೆಗೇ ಪ್ರಾಶಸ್ತ್ಯವನ್ನು ನೀಡುವ, ಮತ್ತು ಗ್ರಾಹಕ ಸಂತೃಪ್ತಿಯ ಬಗೆಗೆ ಭಾರಿ ಅಸಡ್ಡೆಯಿಂದ ನಡೆದುಕೊಳ್ಳುವ ತಯಾರಕರಿಗೆ "ಹುಷಾರ್" ಎಂಬ ಸಂದೇಶವನ್ನು ತಲುಪಿಸಲು ಇದು ಒಳ್ಳೆಯ ಉಪಾಯವಾದೀತಲ್ಲವೆ?

(ಸೌಜನ್ಯ: ಬಳಕೆದಾರರ ವೇದಿಕೆ)

---

ಪ್ರಾಥಮಿಕ ಸಹಕಾರಿ ಕೃಷಿ ಮತ್ತು
ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ.,
ಕೊಪ್ಪ, ಚಿಕ್ಕಮಗಳೂರು ಜಿಲ್ಲೆ.

## ಪ್ರ ಕ ಟ ಣೆ

### ಸಾಲದ ಉರುಳಲ್ಲಿ ಸಿಕ್ಕಿರುವ ರೈತರಿಗೆ ಸರ್ಕಾರವ ಒಂದು ಐತಿಹಾಸಿಕ ರಿಯಾಯಿತಿ !

ಕೊಪ್ಪ ತಾ|| ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಕೊಪ್ಪ, ಇಲ್ಲಿ ಈಗ **ಹಾಲಿ ಕಂತು ಕಟ್ಟಲು ಬಾಕಿ ಇರುವ ರೈತರಿಗೆ ಮತ್ತೊಂದು ಸುವರ್ಣಾವಕಾಶ!**

1. **ದಿನಾಂಕ: 30-6-87ರ** ವರೆಗೆ ಕಂತು ಬಾಕಿ ಇದ್ದ ರೈತರು ಬರಿ ಅಸಲನ್ನು ಮರು ಪಾವತಿ ಮಾಡಿದರೆ ಪೂರ್ಣ ಬಡ್ಡಿ, ಸುಸ್ತಿ ಬಡ್ಡಿ ಮನ್ನಾ; ಹಾಗೂ,
2. ಚಾಲ್ತಿ ಕಂತಿಗೂ ಸಹ, ಅಂದರೆ 87-88ನೇ ಸಾಲಿನ ಕಂತಿಗೂ ಸಹ ಬರಿ ಅಸಲನ್ನು ಮಾತ್ರ ಪಾವತಿಸಿದರೆ ಪೂರ್ಣ ಬಡ್ಡಿ ಮನ್ನಾ ಆಗಿರುತ್ತೆ.

**ಈ ಅವಕಾಶ ದಿನಾಂಕ: 30-3-88ರ ಒಳಗೆ ಪಾವತಿಸಿದರೆ ಮಾತ್ರ.**

ಇಂತಹ ಸುವರ್ಣಾವಕಾಶವನ್ನು ಕಳೆದುಕೊಳ್ಳಬೇಡಿ. ಮರು ಪಾವತಿ ಅವಧಿ ಇನ್ನು ಕೆಲವೇ ದಿನಗಳು ಮಾತ್ರ ಇರುವುದರಿಂದ ಬ್ಯಾಂಕಿನಿಂದ ಪುನಃ ಯಾವುದೇ ತರಹದ ಮಾಹಿತಿ ಅಥವಾ ನೋಟೀಸ್ ಕಳಿಸಲಾಗುವುದಿಲ್ಲ ಆದ್ದರಿಂದ ತಕ್ಷಣ ಸುಸ್ತಿದಾರರು ಬ್ಯಾಂಕಿಗೆ ಬಂದು ಲೆಕ್ಕ ನೋಡಿ ತಮ್ಮ ಉಳಿತಾಯವನ್ನು ಖಾತ್ರಿ ಮಾಡಿಕೊಂಡು ಬರಿ ಅಸಲನ್ನು ಮಾತ್ರ ಕಟ್ಟಿ ಋಣಮುಕ್ತರಾಗಬಹುದು ಇಂತಹ ಅವಕಾಶ ಇನ್ನೆಂದೂ ದೊರೆಯಲಾರದು.

ಒಂದು ಪಕ್ಷ ದಿನಾಂಕ : 30-3-88ರ ಒಳಗೆ ಈ ಅನುಕೂಲವನ್ನು ಪಡೆದು ಸಾಲ ತೀರಿಸದೇ ಇದ್ದ ಸಾಲಗಾರರ ಮೇಲೆ ಸುಸ್ತಿ ವಸೂಲಾತಿ ಕ್ರಮ ಕೈಗೊಳ್ಳಲಾಗುವುದು. ಹಾಗಾದಲ್ಲಿ ಅಸಲಿನ ಜೊತೆಗೆ ಬಡ್ಡಿ, ವಸೂಲಿ ಸುಸ್ತಿ ಬಡ್ಡಿ, ಖರ್ಚು ಎಲ್ಲವನ್ನೂ ತೆರಬೇಕಾಗುವುದು.

**ಆದ್ದರಿಂದ ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡು, ಬಾಕಿದಾರರೆಲ್ಲರೂ ಕೂಡಲೇ ಅಸಲು ಹಣ ಪಾವತಿ ಮಾಡಿ ಪ್ರಯೋಜನ ಪಡೆದುಕೊಳ್ಳಬೇಕಾಗಿ ವಿನಂತಿ.**

ಎ. ಎಂ. ಜಯದೇವಪ್ಪ, ಬಿ.ಕಾಂ.,
ಕಾರ್ಯದರ್ಶಿ

ಎ ಬಿ ವಾಸಪ್ಪ,
ಅಧ್ಯಕ್ಷರು

---

ಜಿಲ್ಲಾ ಪರಿಷತ್, ಚಿಕ್ಕಮಗಳೂರು

**ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ**

## ನಿಮಗೆ ತಿಳಿದಿರಲಿ

1. ತಾಯಿ ಮತ್ತು ಮಕ್ಕಳ ಆರೋಗ್ಯ ದೃಷ್ಟಿಯಿಂದ ಹೆರಿಗೆ ಅಂತರವನ್ನು ಕಾಪಾಡಲು, ಕುಟುಂಬ ಕಲ್ಯಾಣ ಕಾರ್ಯಕ್ರಮದನ್ವಯ, ತಾತ್ಕಾಲಿಕ ವಿಧಾನಗಳಾದ ವಂಕಿ ಅಳವಡಿಕೆ, ನುಂಗುವ ಮಾತ್ರೆ ಉಪಯೋಗಿಸುವುದು ಅಥವಾ 'ನಿರೋಧ್' ಬಳಕೆ ಸೂಕ್ತ.

2. ಎರಡನೇ ಮಗುವಾದ ನಂತರ (ಹೆಣ್ಣಿರಲಿ, ಗಂಡಿರಲಿ), ಇರುವ ಮಕ್ಕಳಿಗೆ ಸಾಕಷ್ಟು ಸೌಲಭ್ಯವನ್ನು ಒದಗಿಸಲು, ಸುಖ ಸಂಸಾರದ ಜೀವನವನ್ನು ನಡೆಸಲು ಸಂತಾನಹರಣ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳುವುದು ಅನುಕೂಲಕರ.

3. ಸಂತಾನಹರಣ ಶಸ್ತ್ರಚಿಕಿತ್ಸೆಗೆ ಒಳಪಡುವ ದಂಪತಿಗಳು, ಪ್ರತಿ ಜಿಲ್ಲೆಯಲ್ಲಿ, ಪ್ರತಿ ತಿಂಗಳು ತೆಗೆಯುವ ಅದೃಷ್ಟ ಬಹುಮಾನದ ಪ್ರಯೋಜನವನ್ನು ಪಡೆಯಲು ಅವಕಾಶವಿದೆ. ಸಂತಾನಹರಣ ಶಸ್ತ್ರಚಿಕಿತ್ಸೆಯಾದವರಲ್ಲಿ ಹತ್ತು ಜನರಿಗೆ ಈ ಯೋಜನೆಯ ಅನುಕೂಲ ಪಡೆಯುವ ಅವಕಾಶವಿದೆ.

4. ಸೂಕ್ತ ಕಾಲದಲ್ಲಿ ನಿಮ್ಮ ಮಗುವಿಗೆ ರೋಗ ನಿರೋಧಕ ಚುಚ್ಚುಮದ್ದು ಕೊಡಿಸುವುದನ್ನು ಮರೆಯಬೇಡಿ.

5. ಮಕ್ಕಳಲ್ಲಿ ಉಂಟಾಗಬಹುದಾದ ಅಂಧತ್ವವನ್ನು ನಿವಾರಣೆ ಮಾಡಲು ಒಂದು ವರ್ಷದಿಂದ 5 ವರ್ಷದ ಒಳಗಿನ ಮಕ್ಕಳಿಗೆ 'ಎ' ಅನ್ನಾಂಗ ಸತ್ವವಿರುವ ದ್ರಾವಣವನ್ನು ಹಾಕಲು ಸೌಲಭ್ಯ ಒದಗಿಸಲಾಗಿದೆ.

6. ರಕ್ತಹೀನತೆ ಇರುವ ಮಕ್ಕಳಿಗೆ, ಗರ್ಭಿಣಿ ಸ್ತ್ರೀಯರಿಗೆ ಮತ್ತು ಸಂತಾನಹರಣ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡ ಮಹಿಳೆಯರಿಗೆ ರಕ್ತ ವರ್ಧಕ ಮಾತ್ರೆಗಳನ್ನು ಕೊಡಲಾಗುವುದು.

ಮೇಲಿನ ಸೇವಾ ಸೌಲಭ್ಯಗಳನ್ನು ನಿಮಗೆ ಹತ್ತಿರವಿರುವ ಆಸ್ಪತ್ರೆಯಲ್ಲಾಗಲೀ, ಆರೋಗ್ಯ ಇಲಾಖೆಯ ಕಾರ್ಯಕರ್ತರಿಂದಾಗಲಿ ಉಚಿತವಾಗಿ ಪಡೆಯಬಹುದು.

ನಿಮಗೆ ಸಮೀಪವಿರುವ ಆಸ್ಪತ್ರೆಗೆ ಇಂದೇ ಭೇಟಿ ನೀಡಿ, ಸಲಹೆ ಪಡೆಯಿರಿ.

**ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ,**
ಚಿಕ್ಕಮಗಳೂರು

---

ಸಂಖ್ಯೆ : ಸಿಆರ್‌ಸಿ.ಸಿಆರ್ : 114:87-88.

ತಹಸೀಲ್ದಾರ್‌ರವರ ಕಾರ್ಯಾಲಯ
ಕೊಪ್ಪ ತಾಲ್ಲೂಕು, ಕೊಪ್ಪ.
ದಿನಾಂಕ: 16-3-88

## ಪ್ರ ಕ ಟ ಣೆ

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರುವುದೇನೆಂದರೆ ಚಿಕ್ಕಮಗಳೂರು ಜಿಲ್ಲೆ, ಕೊಪ್ಪ ತಾಲ್ಲೂಕು ಮೇಗುಂದ ಹೋಬಳಿ ಹೆಗ್ಗಾರು ಗ್ರಾಮದ ಹತ್ತಿರ ... ವಾಸವಾಗಿರುವ ಶ್ರೀ ಶ್ರೀನಿವಾಸಯ್ಯ ಎಂಬುವವರು ಇದೇ ಹೆಗ್ಗಾರು ಗ್ರಾಮದ ಸರ್ವೆ ನಂ: 83ರಲ್ಲಿ ತಮ್ಮ ಹೆಸರಿಗೆ 5-00 ಎಕ್ರೆ ಜಮೀನು ಬಾಬ್ತು ಸಿಆರ್‌ಸಿ 7638 ತಾರೀಖು 18-8-69ರ ಮೇರೆಗೆ ಮೂಲ ಕಾಫಿ ಸಿಆರ್‌ಸಿ ಪತ್ರ ಪಡೆದಿದ್ದು, ಸದ್ರಿ ಕಾಫಿ ದೃಢೀಕರಣ ಪತ್ರವು ಕಳೆದು ಹೋಗಿರುವುದರಿಂದ ಮೂಲ ಸಿಆರ್‌ಸಿ ... ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಮೇಲ್ಕಂಡ ಕಾಫಿ ನೊಂದಣಿ ದೃಢೀಕರಣ ಪತ್ರ ನೀಡುವಲ್ಲಿ ಯಾರಿಂದಲಾದರೂ ತಕರಾರು ಇದ್ದಲ್ಲಿ ಈ ಪ್ರಕಟಣೆ ಹೊರಡಿಸಿದ ಹದಿನೈದು ದಿನದ ಒಳಗೆ ಲಿಖಿತ ಮೂಲಕ ಈ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

ತಹಸೀಲ್ದಾರ್, ಕೊಪ್ಪ ತಾಲ್ಲೂಕು.

## ಡಿ.ಸಿ.ಸಿ. ಬ್ಯಾಂಕ್‌ಗೆ ಕಚ್ಚೋಡಿ ಅವಿರೋಧ ಪುನರಾಯ್ಕೆ

ಶೃಂಗೇರಿ : ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್‌ನ ಹಾಲಿ ಅಧ್ಯಕ್ಷ ಕಚ್ಚೋಡಿ ಶ್ರೀನಿವಾಸ್ ವ್ಯ.ಮಾ.ಸ. ಸಂಘಗಳ ಕ್ಷೇತ್ರದಿಂದ ಬ್ಯಾಂಕಿನ ನಿರ್ದೇಶಕರಾಗಿ ಅವಿರೋಧವಾಗಿ ಪುನರಾಯ್ಕೆ ಹೊಂದಿದ್ದಾರೆ. ವ್ಯವಸಾಯುಗಾರರ ಕ್ಷೇತ್ರದಿಂದ ನ. ರಾ. ಪುರ ತಾ|| ಕಾಸನ ಚಂದ್ರಶೇಖರ್, ಕೊಪ್ಪ ತಾ|| ಕೊಡಸ್ತಾಳಿ ಶೇಷಪ್ಪ ಗೌಡ, (ಇಬ್ಬರೂ ಅವಿರೋಧ) ಮತ್ತು ಈ ತಾಲ್ಲೂಕಿನ ವಿ. ಶೇಷಾದ್ರಿ ಆಯ್ಕೆಯಾಗಿದ್ದಾರೆ.

ಶೇಷಪ್ಪ ಗೌಡ ಸಣ್ಣ ರೈತರಾಗಿದ್ದು, ಈ ಪ್ರಾಂತ್ಯದಿಂದ ಸಣ್ಣ ರೈತರೊಬ್ಬರು ನಿರ್ದೇಶಕರಾಗಿ ಆಯ್ಕೆಯಾಗಿರುವುದು ಕಳೆದ 25 ವರ್ಷದೀಚೆಗೆ ಇದೇ ಮೊದಲೆನ್ನಲಾಗಿದೆ.

ಅಧ್ಯಕ್ಷ ಚುನಾವಣೆ ಮಾ. 29ರೊಳಗೆ ನಡೆಯಲಿದೆ.

# ಮಧ್ಯವರ್ತಿಗಳ ವಂಚನೆಗೆ ಒಳಗಾಗದಿರಲು ಸಾರಿಗೆ ಅಧಿಕಾರಿ ಮನವಿ

ಕೊಪ್ಪ : ವಾಹನ ತೆರಿಗೆ ಬಾಕಿ ವಸೂಲಾತಿಯ ಸಂಬಂಧವಾಗಿ ಜಿಲ್ಲೆಯ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಯವರು ಜಿಲ್ಲೆಯಾದ್ಯಂತ ಸಂಚರಿಸಿ ತನಿಖೆ ಮಾಡಿರುವಂತೆ, ಜಿಲ್ಲೆಯಲ್ಲಿ ವಾಹನ ವ್ಯವಹಾರದಲ್ಲಿರುವ ಅನೇಕ ಮಧ್ಯವರ್ತಿಗಳು ವಾಹನ ಮಾಲೀಕರಿಂದ ಬಾಕಿ ತೆರಿಗೆ ಹಣ ಪಡೆದು ಸಂಬಂಧಿಸಿದ ಇಲಾಖೆ ಖಜಾನೆಗೆ ಪಾವತಿ ಮಾಡದಿರುವುದು ಹಾಗೂ ವಾಹನ ಚಾಲನಾ ಅನುಜ್ಞಾನ ಪತ್ರ ಬಯಸಿ ಅರ್ಜಿ ಸಲ್ಲಿಸುವವರಿಂದ ಅಪಾರವಾದ ಹಣ ಪಡೆದು ವಂಚಿಸಿರುವುದು ತಿಳಿದು ಬಂದಿದ್ದು, ಇನ್ನು ಮುಂದೆ ಸಾರ್ವಜನಿಕರು ತಮ್ಮಗಳ ಎಲ್ಲಾ ಬೇಡಿಕೆಗಳ ಬಗ್ಗೆ ನೇರವಾಗಿ ಅಧಿಕಾರಿಗಳನ್ನು ಸಂಪರ್ಕಿಸಿ ಕೆಲಸ ಕಾರ್ಯಗಳನ್ನು ವಿಲೇವಾರಿ ಮಾಡಿಸಿಕೊಳ್ಳಬೇಕೆಂದು ಸದರಿ ಅಧಿಕಾರಿ ಕೋರಿದ್ದಾರೆ.

ಪ್ರತಿ ತಿಂಗಳ ತಾ|| 20, 21 ಮತ್ತು 25, 26ರಂದು ತಾಲ್ಲೂಕು ಮಟ್ಟದಲ್ಲಿ ಇಲಾಖೆ ಅಧಿಕಾರಿಗಳು ಮಾಡುವ ಕ್ಯಾಂಪ್‌ಗಳಲ್ಲಿ ಸ.ಪ್ರಾ.ಸಾ. ಅಧಿಕಾರಿ ಅಥವಾ ಪ್ರಾ.ಸಾ. ಅಧಿಕಾರಿಗಳು ಖುದ್ದು ಹಾಜರಿರುವುದರಿಂದ, ಸಾರ್ವಜನಿಕರು ಮಧ್ಯವರ್ತಿಗಳನ್ನು ತಪ್ಪಿಸಿ ನೇರವಾಗಿ ತಮ್ಮ ಕೆಲಸಗಳನ್ನು ಮಾಡಿಸಿಕೊಳ್ಳಬೇಕೆಂತಲೂ ಅವರು ವಿನಂತಿಸಿದ್ದಾರೆ.

ತೆರಿಗೆ ಬಾಕಿ ನಿಲ್ಲಿಸಿಕೊಂಡಿರುವ ಬಾಕಿದಾರರನ್ನು ಮತ್ತು ವಾಹನಗಳನ್ನು ಪತ್ತೆ ಹಚ್ಚಿ ಸೂಕ್ತ ಕ್ರಮ ತೆಗೆದುಕೊಳ್ಳಲು ಇಲಾಖೆ ತೀರ್ಮಾನಿಸಿರುವುದರಿಂದ ಉಂಟಾಗಬಹುದಾದ ತೊಂದರೆಗಳನ್ನು ನಿವಾರಿಸಲು ಬಾಕಿದಾರರು **ತಾರೀಖು : 30-3-1988ರೊಳಗಾಗಿ** ಬಾಕಿ ತೆರಿಗೆ ಮತ್ತು ಜೀವಾವಧಿ ತೆರಿಗೆಯನ್ನು ಪೂರ್ಣ ಸಂದಾಯಿಸಿ ಸಹಕರಿಸಬೇಕಾಗಿಯೂ ಅವರು ಮನವಿ ಮಾಡಿದ್ದಾರೆ.

# ಕ್ಷೇತ್ರದಾದ್ಯಂತ ಬಂದ್ ಬಹುತೇಕ ಯಶಸ್ವಿ

ಕೊಪ್ಪ : ವಿರೋಧ ಪಕ್ಷಗಳ ಕರೆಯ ಮಾ. 15ರ ಭಾರತ ಬಂದ್ ಶೃಂಗೇರಿ ಕ್ಷೇತ್ರದ ಮೂರೂ ತಾ||ಗಳ ಎಲ್ಲ ಕಡೆ ಬಹುತೇಕ ಯಶಸ್ವಿಯಾಯಿತು. ಅಲ್ಲಲ್ಲಿ ಕಾಂಗ್ರೆಸ್ ಕಾರ್ಯಕರ್ತರು ಅಂಗಡಿಗಳನ್ನು ತೆರೆಸುವ ಯತ್ನ ಮಾಡಿದರಾದರೂ ಪೂರ್ತಿ ಯಶಸ್ವಿಯಾಗಲಿಲ್ಲ. ನ. ರಾ. ಪುರದಲ್ಲಿ ಸಿಪಿಐ–ಜನತಾ ಕಾರ್ಯಕರ್ತರಿಗೂ ಕಾಂಗ್ರೆಯವರಿಗೂ ನಡೆದ ಸಣ್ಣ ಘರ್ಷಣೆಯಲ್ಲಿ ಸಿಪಿಐ ಕಾರ್ಯದರ್ಶಿ ರಮೇಶ ಪೂಜಾರಿಯವರ ಕಾಲಿನ ಮೇಲೆ ಅಸ್ಗರ್ ಎಂಬವರು ಕಾರು ಹರಿಸಿದ್ದು, ಎರಡೂ ಕಡೆಯವರ ಮೇಲೆ ಪ್ರಕರಣಗಳು ದಾಖಲಾಗಿವೆ. ಪರಿಸ್ಥಿತಿ ಕೈಮೀರುವುದನ್ನು ತಡೆಯಲು ಮಧ್ಯಾಹ್ನ 144 ಸೆಕ್ಷನ್ ನಿಷೇಧಾಜ್ಞೆ ಜಾರಿಗೊಳಿಸಲಾಯಿತು.

ಬಂದ್ ಬಗ್ಗೆ ಅಂಗಡಿಗಳವರಲ್ಲಿ ಸ್ವಲ್ಪ ಮಟ್ಟಿಗೆ ಮಿಶ್ರ ಪ್ರತಿಕ್ರಿಯೆ ವ್ಯಕ್ತವಾಯಿತು. ಸಂಜೆಯ ನಂತರ ಹಲವಾರು ಅಂಗಡಿಗಳು ತೆರೆದಿದ್ದವು.

## ಆಹ್ವಾನ ಕ್ರಿಕೆಟ್: ಮೆಗ್ಗಾನ್ಸ್ ತಂಡಕ್ಕೆ ಚಾ|| ಟ್ರೋಫಿ

ಕೊಪ್ಪ : ಮಾ. 3ರಿಂದ 10ರವರೆಗೆ ನಡೆದ ನಿಗದಿತ ಓವರ್ ಆಹ್ವಾನ ಕ್ರಿಕೆಟ್ ಪಂದ್ಯಾವಳಿಯಲ್ಲಿ ಶಿವಮೊಗ್ಗದ ಮೆಗ್ಗಾನ್ಸ್ ತಂಡ (29 ಓವರಿಗೆ 171) ಕೊಪ್ಪದ ಅರುಣೋದಯ ತಂಡವನ್ನು (24.5 ಓವರ್‌ಗಳಲ್ಲಿ 115ರನ್) 55 ರನ್‌ಗಳಿಂದ ಸೋಲಿಸಿ ಚಾಂಪಿಯನ್ಸ್ ಟ್ರೋಫಿ ಗಳಿಸಿತು

ಶಿವಮೊಗ್ಗ ತಂಡದ ಸಂತೋಷ್ ಪಂದ್ಯದ ಹಾಗೂ ಟೂರ್ನಿಯ 'ಶ್ರೇಷ್ಠ', ವೇಣುಗೋಪಾಲ್ ಶ್ರೇಷ್ಠ ಬೌಲರ್, ಕೃಷ್ಣಮೂರ್ತಿ ಶ್ರೇಷ್ಠ ವಿಕೆಟ್ ಕೀಪರ್ ಮತ್ತು ಅರುಣೋದಯದ ರವೀಶ್ ಸರಣಿಯ ಶ್ರೇಷ್ಠ ಬ್ಯಾಟ್ಸ್‌ಮನ್ ಪ್ರಶಸ್ತಿಗಳನ್ನು ಗಳಿಸಿದರು.

---

ಚಂದಾ ಹಣ ಕಳಿಸಿ ಸಹಕರಿಸಿ

ವಾರ್ಷಿಕ ಚಂದಾ 25 ರೂ.

## ಅಡಿಕೆ ಧಾರಣೆ

**ಶಿವಮೊಗ್ಗ 19-3-1988**
ಸರಕು 3600 – 4480
ಬೆಟ್ಟೆ 2300 – 3150
ಗೊರಬಲು : 840 – 1240

**ಸಾಗರ 19-3-198**
ಚಿಕಣಿ . 5400 – 4800
ಚಾಲಿ : 1500 – 2500
ಸಿಪ್ಪೆಗೋಟು : 550 – 850
ಇಡಿ : 2250 – 2600
ಕಾಳು ಮೆಣಸು : 4000 – 4500

## ಏಲಕ್ಕಿ ಧಾರಣೆ

**ಸಕಲೇಶಪುರ 17.3.1988**
ಸರಾಸರಿ : 136 - 142

**ಸಿರ್ಸಿ 17 3 1988**
151 – 155

**ಮಂಗಳೂರು 19.3.1988**
ಏಲಕ್ಕಿ : 120 – 140
ಕಾಳು ಮೆಣಸು : 3840 – 3850



ಅಗಳಗಂಡಿ ಮಂಡಲ ಪಂಚಾಯಿತಿ

ಅಗಳಗಂಡಿ – 577 123 ಕೊಪ್ಪ ತಾಲ್ಲೂಕು

# ಹರಾಜು ಪ್ರಕಟಣೆ

ಅಗಳಗಂಡಿಯಲ್ಲಿರುವ 1 ಅಂಗಡಿ ಮಳಿಗೆ, 1 ಹೋಟೆಲ್ ಸ್ಟಾಲ್ ಮತ್ತು ಕಛೇರಿಯಲ್ಲಿರುವ ಹಳೇ ಪೇಪರ್‌ಗಳು– ಇವುಗಳ ಬಹಿರಂಗ ಹರಾಜನ್ನು **ದಿನಾಂಕ 28.3.88ನೇ ಮಧ್ಯಾಹ್ನ 2 ಗಂಟೆಗೆ** ಮಂಡಲ ಪಂಚಾಯಿತಿ ಕಾರ್ಯಾಲಯದಲ್ಲಿ ಏರ್ಪಡಿಸಲಾಗಿದೆ. ಇಚ್ಛೆಯುಳ್ಳವರು ಹರಾಜಿನಲ್ಲಿ ಭಾಗವಹಿಸಬಹುದೆಂದು ಈ ಮೂಲಕ ಪ್ರಚಾರ ಪಡಿಸಲಾಗಿದೆ.

ಹೆಚ್ಚಿನ ವಿವರಗಳನ್ನು ಮಂಡಲ ಪಂಚಾಯಿತಿ ಕಛೇರಿಯಲ್ಲಿ, ರಜಾ ದಿನಗಳನ್ನು ಹೊರತುಪಡಿಸಿ, ಕೆಲಸದ ವೇಳೆಯಲ್ಲಿ ತಿಳಿದುಕೊಳ್ಳಬಹುದು.

**ಕೆ. ಸಿ. ಸತೀಶ್,**
ಪ್ರಧಾನರು,
ಅಗಳಗಂಡಿ ಮಂಡಲ ಪಂಚಾಯಿತಿ

---

ವಿದ್ಯಾರಣ್ಯಪುರ ಮಂಡಲ ಪಂಚಾಯಿತಿ, ವಿದ್ಯಾರಣ್ಯಪುರ

ಕಾರ್ಯಾಲಯ : ಶೃಂಗೇರಿ – 577 139

ದಿನಾಂಕ 12-3-88

# ಸಾರ್ವಜನಿಕರ ಪ್ರಕಟಣೆ

ವಿದ್ಯಾರಣ್ಯಪುರ ಮಂಡಲ ಪಂಚಾಯಿತಿ ಕಾರ್ಯಾಲಯದಿಂದಾ ಈ ಮೂಲಕ ಸಮಸ್ತ ಜನರಿಗೂ ತಿಳಿಯಪಡಿಸುವುದೇನೆಂದರೆ, ವಿದ್ಯಾರಣ್ಯಪುರ ಮಂಡಲ ಪಂಚಾಯಿತಿಯಿಂದ ಈ ಕೆಳಗೆ ನಮೂದಿಸಿದ ಬಾಬುಗಳನ್ನು ಮುಂದೆ ಕಾಣಿಸಿದ ಅವ ಪರಿಗೆ ದಿನಾಂಕ 28.3.88ರಂದು ಮಂಡಲ ಪಂಚಾಯಿತಿ ಕಾರ್ಯಾಲಯದಲ್ಲಿ ಹಾಗ ದಿನಾಂಕ 29.3.88 ರಂದು ಕಾವಡಿ ಪಂಚಾಯಿತಿ ಕಛೇರಿಯಲ್ಲಿ ಹರಾಜು ಮಾಡಲ ಗುವುದು ಇಷ್ಟವುಳ್ಳವರು ಭಿಡ ಸವಾಲು ಮೂಲಕ ಪಡೆಯಲು ಸದವಕಾಶ ಕಳೆ ಕೊಳ್ಳಬಾರದಾಗಿ ಈ ಮೂಲಕ ಪ್ರಕಟಿಸಲಾಗಿದೆ. ಷರತ್ತುಗಳನ್ನು ಮಂಡಲ ಪಂಚ ಯಿತಿ ಕಾರ್ಯಾಲಯದಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

| ಕ್ರಮ ಸಂಖ್ಯೆ | ಬಾಬುಗಳು | ಹರಾಜಿನ ದಿನ ಮತ್ತು ಸಮಯ | ಅವಧಿ |
|---|---|---|---|
| 1. | ಮಾಂಸದ ಮಾರಾಟದ ಹಕ್ಕು | 28.3.88 ಸಂಜೆ 4.00 | 1.4.88ರಿಂ 31.3.89ರವರೆ |
| 2. | ಹಸಿ ಮೀನು ಮಾರಾಟದ ಹಕ್ಕು | 28.3.88 ಸಂಜೆ 4.00 | 1.4.88ರಿಂ 31.3.89ರವ |
| 3. | ಅಡ್ಡಗದ್ದೆ ಅಂಗಡಿ ಮಳಿಗೆ ಭಾಗ I | 29.3.88 ಬೆಳಗ್ಗೆ 11.00 | 1.4.88ರ 31.3.92ರವ |
| 4. | " " ಭಾಗ II | " | " |
| 5. | ಪಂಚಾಯಿತಿ ಕಛೇರಿ ಆವರಣದಲ್ಲಿರುವ ತೆಂಗಿನ ಫಸಲು. | " | " |

ಎಸ್. ಸಿ. ರಂಗಪ್ಪ ನಾಯ್ಕ್
ಕಾರ್ಯದರ್ಶಿ

ಎಚ್. ಜಿ. ಶಿವಪ್ಪ
ಪ್ರಧಾನರು

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀವಟಿಗೆ ಅಚ್ಚುಕೂಟ, ಕೊಪ್ಪ